ಒಂದಾಣೆ ಮಾಲೆ. **273**

# ಧರ್ಮಸ್ಥಾಪನೆ



ರಚಯಿತ:
ಯಸ್. ರಾಮಭಟ್ಟ, ಪುತ್ತೂರು.



1960

ಬೆಲೆ: ಆಣೆ ೧.

ಒಂದಾಣೆ ಮಾಲೆ — ಮಂಗಳೂರು.

# ಅಮೂಲ್ಯ ಧಾರ್ಮಿಕ ಪುಸ್ತಕಗಳು

೧. ಧರ್ಮಶಿಕ್ಷೆ
೨. ಶ್ರೀ ಶಂಕರಾಚಾರ್ಯರ ಜೀವನಚರಿತ್ರೆ
೩. ಶ್ರೀ ಶಂಕರಾಚಾರ್ಯವಿರಚಿತ ಸ್ತೋತ್ರಗಳು
೪. ಅಮರನಾಥ ಯಾತ್ರೆ
೫. ದ್ವಾರಕಾ
೬. ದ್ವಾದಶ ಜ್ಯೋತಿರ್ಲಿಂಗಗಳು
೭. ನಮ್ಮ ವೇದಗಳು
೮. ಶ್ರೀ ಶಂಕರಾಚಾರ್ಯ ವಿರಚಿತ ವಿವೇಕಚೂಡಾಮಣಿ— ಭಾಗ ೧.
೯. ,, ,, ,, — ಭಾಗ ೨.
೧೦. ಶತಪಥ ಬೋಧಾಮೃತ
೧೧. ಕೇನೋಪನಿಷತ್
೧೨. ಈಶಾವಾಸ್ಯೋಪನಿಷತ್
೧೩. ಕೈಲಾಸಮಾನಸ ಸರೋವರ ಯಾತ್ರೆ (ಭಾಗ ೧ ಮತ್ತು ೨).
೧೪. ವೇದಾಂತ ಪ್ರಶ್ನೋತ್ತರೀ
೧೫. ಹಿತೋಪದೇಶ
೧೬. ಅನುಭವ ವೇದಾಂತ— ಈ ಮೇಲಿನ ಅಮೂಲ್ಯ ಧಾರ್ಮಿಕ ಪುಸ್ತಕಗಳು, ಒಂದಾಣೆ ಮಾಲೆಯಲ್ಲಿ ಪ್ರಕಟವಾಗಿವೆ.

## ಪ್ರತಿಯೊಂದಕ್ಕೂ ಒಂದಾಣೆ.

ಮೇಲಿನ ಹದಿನಾರು ಪುಸ್ತಕಗಳನ್ನು ಟಪ್ಪಾಲಲ್ಲಿ ತರಿಸಿಕೊಳ್ಳುವವರು 16 ಪುಸ್ತಕಗಳ ಕ್ರಯ ರೂ. 1 ಮತ್ತು ಅಂಚೆವೆಚ್ಚ 0—5—0ಯನ್ನು ಮನಿಯಾರ್ಡರ್ ಮೂಲಕ ಅಥವಾ ಅಂಚೆಚೀಟುಗಳ ಮೂಲಕ ಕಳಿಸಿಕೊಡಬೇಕು. ವಿ. ಪಿ. ಕಳಿಸಲ್ಪಡುವುದಿಲ್ಲ.

## ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

# ಧರ್ಮಸ್ಥಾಪನೆ

(ಏಕಾಂಕ ನಾಟಕ)

.........

## ಪಾತ್ರ ಪರಿಚಯ:

೧. ಪರಮೇಶ್ವರ. ೨. ಪಾರ್ವತಿ. ೩. ಶ್ರೀಮನ್ನಾರಾಯಣ. ೪. ನಾರದ. ೫. ನಂದಿ. ೬. ಷಣ್ಮುಖ, ಗಣಪರು. ೭. ಯಜಮಾನ, ಯಜಮಾನಿ, ದಾರಿಹೋಕರು, ಊರವರು.

## ದೃಶ್ಯ ೧

[ಹಿಮದಿಂದಾವೃತವಾದ ಹಿಮಾಲಯ ಪರ್ವತಶಿಖರಶ್ರೇಣಿ. ಕೈಲಾಸ ಗಿರಿಯಲ್ಲಿ ಗೌರಿಯರಸನ ಒಡ್ಡೋಲಗ.]

(ತೆರೆಯಲ್ಲಿ): ಜೈ ಶ್ರೀಮನ್ನಾಯಣ! ಜಗತ್ಸಾರಥೀ, ಚೈತನ್ಯಸ್ವರೂಪಿ ಜಯವಾಗಲಿ! ಚಿನ್ಮಯ ಚಿದಾನಂದ ಮಾಧವಾ, ಶುಭವಾಗಲಿ! ಜೈ ಶ್ರೀಮನ್ನಾರಾಯಣ!

ಪರಮೇಶ್ವರ: ನಂದೀಶ್ವರಾ, ಯಾರೋ ಮಹಾತ್ಮರು ಬಂದಂತಿದೆ. ಅವರನ್ನು ಸತ್ಕರಿಸಿ, ಇಲ್ಲಿಗೆ ಕರೆದುಕೊಂಡು ಬಾ.

(ನಂದೀಶ್ವರನು ಹೋಗಿ ನಾರದನಿಗೆ ಅಡ್ಡಬಿದ್ದು, ಕೈಹಿಡಿದು ನಡೆಸಿಕೊಂಡು ಬರುವನು.)

ನಾರದ: ಜೈ ಶಂಭೋಶಂಕರ! ಜೈ ಪಾರ್ವತೀರಮಣ! ಜೈ ದುರಿತ ನಿವಾರಣ! ಜೈ ಪರಮಪಾವನಚರಣ! ಜೈ ಭುಜಗಭೂಷಣ! ಜೈ ದುಷ್ಟ ಮರ್ದನ ಶಿಷ್ಟರಕ್ಷಣ! ಜೈ ಶಂಭೋಶಂಕರ! ಮಹಾಪ್ರಭೋ, ನಾರದನು ವಂದಿಸುತ್ತಿದ್ದಾನೆ. (ವಂದಿಸುವನು.)

ಪರಮೇಶ್ವರ: (ನಾರದನನ್ನು ಮೈದಡವಿ ಹರಸಿ) ಶುಭಮಸ್ತು! ನಾರದಾ, ನೀನು ತ್ರಿಲೋಕಸಂಚಾರಿಯಲ್ಲವೇ? ನನ್ನಿಂದ ನಿರ್ಮಿಸಲ್ಪಟ್ಟ ಜಗತ್ತು ಸುಗಮವಾಗಿ ನಡೆಯುತ್ತಿದೆಯಲ್ಲವೇ? ನಿನ್ನ ಅನುಭವವನ್ನು ಹೇಳು.

ನಾರದ: ಶಿವನೆ, ಭವನೆ, ಗಂಗಾಧರನೆ, ಕೇಳೋಣಾಗಲಿ! ನಾನು ಎಲ್ಲಾ ಲೋಕಗಳನ್ನೂ ಸಂಚರಿಸಿಯೇ ಬಂದೆ. ಎಲ್ಲೆಡೆಯೂ ಸುಸೂತ್ರವಾಗಿಯೇ ನಡೆಯುತ್ತಿದೆ. ಆದರೆ....!

ಪರಮೇಶ್ವರ: ಆದರೇನು? ಎಲ್ಲಿ ತಾನೇ ಸುಸೂತ್ರವಾಗಿ ನಡೆಯು ವುದಿಲ್ಲ?

ನಾರದ: ಭಕ್ತವತ್ಸಲನೇ, ನಾನು ಯಮನ ಲೋಕಕ್ಕೂ ಹೋದೆ. ಅವನ ಆಸ್ಥಾನವನ್ನು ಬಣ್ಣಿಸುವುದೇಕೆ? ಚಿತ್ರಗುಪ್ತ ಮೊದಲಾದವರೊಡನೆ ಆತನು ತನ್ನ ಆಸ್ಥಾನವನ್ನು ನಡೆಯಿಸುತ್ತಿದ್ದನು. ದೂತರು ಓಲೈಸುತಿದ್ದರು.

ಪರಮೇಶ್ವರ: ತರುವಾಯ—

ನಾರದ: ನಾನು ಹೋದಾಗ ಅಲ್ಲಿ ಪಾಪಿಗಳ ಮತ್ತು ಪುಣ್ಯವಂತರ ವಿಚಾರಣೆಯಾಗುತ್ತಿತ್ತು. ಪುಣ್ಯವಂತರನ್ನು ಸ್ವರ್ಗಕ್ಕೂ, ಪಾಪಿಗಳನ್ನು ನರಕಕ್ಕೂ ಕಳುಹುತ್ತಿದ್ದರು.

ಪರಮೇಶ್ವರ: ಪುಣ್ಯವಂತರನ್ನು ಸ್ವರ್ಗಕ್ಕೂ, ಪಾಪಿಗಳನ್ನು ನರಕಕ್ಕೂ ಕಳುಹಿಸುವುದು ಸರಿಯಲ್ಲವೇ?

ನಾರದ: ಸರಿ, ಮಹಾಪ್ರಭೋ!

ಪರಮೇಶ್ವರ: ಮತ್ತೆ?

ನಾರದ: ಯಮನಲ್ಲಿಗೆ ಈಗ ಬರುತ್ತಿರುವುದು ಧರ್ಮಿಷ್ಠರಲ್ಲ. ಪಾಪಿಗಳೇ ಬಂದು ತುಂಬುತ್ತಿದ್ದಾರೆ.

ಪರಮೇಶ್ವರ: ತಪ್ಪೇನು? ಅತ್ತೆಗೊಂದು ಕಾಲವಾದರೆ ಸೊಸೆಗೊಂದು ಕಾಲವಲ್ಲವೇ? ಒಮ್ಮೆ ಧರ್ಮಿಷ್ಠರು, ಒಮ್ಮೆ ಪಾಪಿಷ್ಠರು ಬರುತ್ತಾರೆ.

ನಾರದ: ಮಹಾಪ್ರಭೋ, ಈಗ ಪುನ್ನಾಮ ಮುಂತಾದ ನರಕಗಳೆಲ್ಲ ತುಂಬಿವೆ. "ನೋ ವೇಕೆನ್ಸಿ" (No Vacancy) ಎಂದು ಯಮನು ನರಕಗಳಲ್ಲಿ ಬೋರ್ಡು ಹಾಕಿರುವನು.

ಪರಮೇಶ್ವರ: ಅದೇನು ನಾರದಾ, 'ನೋ ವೇಕೆನ್ಸಿ' ಅಂದರೆ?

ನಾರದ: ಮಹಾಪ್ರಭೋ, ಅದು ಜಾಗತಿಕ ಭಾಷೆಯ ಪ್ರಭಾವ. ಯಮಲೋಕಕ್ಕೂ ಹುಟ್ಟಿದೆ ಮಹಾಪ್ರಭೋ.

ಪರಮೇಶ್ವರ: ಯಮಲೋಕದಲ್ಲಿ ಮತ್ತೇನಾಯಿತು?

ನಾರದ: ಆ ಪಾಪಿಗಳು 'ನಮ್ಮನ್ನು ಸ್ವರ್ಗಕ್ಕೋ, ನರಕಕ್ಕೋ ಬೇಗನೆ ಕಳುಹಿಸು! ನಮ್ಮನ್ನು ಇಲ್ಲಿ ಸುಮ್ಮಗೆ ಕೊಳೆಸಲು ಯಾಕೆ ಕರೆಸಿದೆ?' ಎಂದು ಗುಲ್ಲೆಬ್ಬಿಸಿದರು.

ಪರಮೇಶ್ವರ: ಯಮನು ಶಾಂತಿಸ್ಥಾಪನೆ ಮಾಡಿದನೇ?

ನಾರದ: ಅವನು ಯಮನಲ್ಲವೇ? ಹೇಗೂ ಶಾಂತಿಯನ್ನು ಸ್ಥಾಪಿಸಿದನು. ಪಾಪಿಗಳಲ್ಲಿ ಕೆಲವರನ್ನು ಉಪಾಯಗಾಣದೆ ಸ್ವರ್ಗಕ್ಕೆ ಅನಿರೀಕ್ಷಿತವಾಗಿ ಕಳುಹಬೇಕಾಯಿತು. ಕಳುಹಿದನು.

ಪರಮೇಶ್ವರ: ಹಾಗೋ?

ನಾರದ: ಹೌದು ಪ್ರಭೋ. ಜನನನಿಯಂತ್ರಣವು (Birth control) ಬೇಗನೆ ಲೋಕದಲ್ಲಿ ಕಾಯಿದೆಯಾಗಿ ಮಾರ್ಪಡುವಂತೆ ಯಮನು ದೇವದೇವನನ್ನು ಮನಸಾರೆ ಪ್ರಾರ್ಥಿಸಿಕೊಂಡನು.

ಪರಮೇಶ್ವರ: ಹೀಗೋ ಸಮಾಚಾರ? ಯಮನ ಲೋಕದಲ್ಲಿ ಪಾಪಿಷ್ಠರೇ ತುಂಬಿದ್ದಾರೋ?

ನಾರದ: ಹೌದು ಪ್ರಭು. ಭೂಲೋಕದಲ್ಲಿ ಪಾಪಿಗಳೇ ಹೆಚ್ಚಿದ್ದಾರೆ. ಅವರು ಧರ್ಮದ ಚಿತ್ರಹಿಂಸೆ ಮಾಡುತ್ತಿದ್ದಾರೆ. ಸುರೆ, ಜೂಜು, ಶರಾಬು, ಪರಸ್ತ್ರೀಗಮನ, ಕಳವು, ಕೊಲೆಸುಲಿಗೆಗಳೇ ಮೊದಲಾದ ದುರ್ಮಾರ್ಗದಲ್ಲಿ ಜನರು ಪ್ರವೃತ್ತರಾಗಿದ್ದಾರೆ ಈ ಪಾಪಿಗಳನ್ನು ಹಿಡಿದು, ಹಿಡಿದೆಳೆದು ದಿನಾಲೂ ತಂದು ಯಮನ ದೂತರು ಬಸವಳಿದಿದ್ದಾರೆ. ಅವರು ವಿಶ್ರಾಂತಿಗಾಗಿ ಯಮನ ಮುಂದೆ "ಸತ್ಯಾಗ್ರಹ" ಮಾಡುವ ಯೋಚನೆಯಲ್ಲಿದ್ದಾರೆ.

ಪರಮೇಶ್ವರ: ಹೀಗಾಗಿದೆಯೋ ಸ್ಥಿತಿ? ನಮ್ಮ ಭಕ್ತರಿಗೇನೂ ಅಡ್ಡಿ ಆತಂಕಗಳು ವಿಶೇಷವಾಗಿಲ್ಲವಷ್ಟೇ?

ನಾರದ: ಮಹಾಪ್ರಭೋ, ಅವರಿಗೇನೂ ಅಡ್ಡಿತಡೆಗಳಿಲ್ಲ ಆದರೆ ಎಲ್ಲರೂ ರಾವಣ ಸನ್ಯಾಸಿಗಳೇ. ದೇಗುಲದ ದುಡ್ಡು ಪೂಜಾರಿಗಳೂ ಒಟ್ಟೊಟ್ಟಿಗೆ ಮಾಯವಾಗುತ್ತಿದ್ದಾರೆ. ಇಂದ್ರಾದಿಗಳು ಹವಿರ್ಭಾಗವಿಲ್ಲದೆ ತೊಳಲಾಡುತ್ತಿದ್ದಾರೆ

ಪರಮೇಶ್ವರ: ಹೀಗೆಲ್ಲಾ ಲೋಕದ ಸ್ಥಿತಿ ತಲೆಕೆಳಗಾಗಿದೆಯೋ? ಸಿಕ್ಕಿದ ಸ್ವಾತಂತ್ರ್ಯದ ದುರುಪಯೋಗವನ್ನು ಮಾಡುತ್ತಿದ್ದಾರಲ್ಲವೇ ನಾರದ?

ನಾರದ: ಹೌದು ಪರಮೇಶ್ವರಾ, ಎಲ್ಲೆಲ್ಲೂ ಅಧರ್ಮವು ತಾಂಡವವಾಡುತ್ತಿದೆ.

ಪರಮೇಶ್ವರ: ಹಾಗಿದ್ದರೆ ಹೋಗಿ ಶ್ರೀಮನ್ನಾರಾಯಣನಲ್ಲಿ ಧರ್ಮಸ್ಥಾಪನೆ ಮಾಡಲು ಹೇಳು.

ನಾರದ: ಅಲ್ಲಿಂದಲೇ ಇಲ್ಲಿಗೆ ಬಂದಿರುತ್ತೇನೆ ಪ್ರಭೋ.

ಪರಮೇಶ್ವರ: ಏನು? ಭಾವನು ಧರ್ಮಸ್ಥಾಪನೆ ಮಾಡಲು ಹೋಗು ವುದಿಲ್ಲವಂತೆಯೋ?

ನಾರದ: ಇಲ್ಲವಂತೆ. ಅವರು ಹೀಗೆಂದರು: "ನಾರದಾ, ನನಗೆ ದಶಾವತಾರವೆತ್ತಿ ಸಾಕು ಸಾಕಾಗಿ ಹೋಗಿದೆ. ಪರಶಿವನೇ ಹೋಗಿ ಧರ್ಮ ಸ್ಥಾಪನೆಮಾಡಲಿ"ಂದು.

ಪರಮೇಶ್ವರ: ಪರವಾಗಿಲ್ಲ! ನಾನೇ ಹೋಗುತ್ತೇನೆ. ನಮ್ಮಿಬ್ಬರಲ್ಲಿ ಭೇದವಿಲ್ಲ. ಅವನ ಕಾರ್ಯವೇ ನನ್ನ ಕಾರ್ಯ, ನನ್ನ ಕಾರ್ಯವೇ ಅವನ ಕಾರ್ಯ! ನಂದೀ, ಇಲ್ಲಿಯ ಪಾವಿತ್ರ್ಯವನ್ನು ಕಾಪಾಡಿಕೊಂಡಿರು. ನನಗೆ ಅವಶ್ಯವಿದ್ದಾಗ ನಾನು ಕರೆದಲ್ಲಿಗೆ ಬಾ.

ನಾರದ: ರುಂಡಮಾಲನೇ, ನಾನು ಹೋಗಲೋ? ನನಗೆ ಬೇರೆ ಲೋಕಗಳಲ್ಲಿ ತಿರುಗಲಿದೆ.

ಪರಮೇಶ್ವರ: ನಿನಗೇನವಸರ, ನಾರದ? ಸ್ವಲ್ಪ ತಾಳು! ಹೂಂ, ಹೋಗುವುದಿದ್ದರೆ ಹೋಗು. ಯಮನ ಲೋಕಕ್ಕೂ ಹೋಗುತ್ತೀಯಲ್ಲಾ?

ನಾರದ: ಹೌದು, ಶಂಕರನೆ.

ಪರಮೇಶ್ವರ: ಅಲ್ಲಿಯ ದೂತರು ಸತ್ಯಾಗ್ರಹವನ್ನು ಹೂಡದಿರಲೆಂದು ನಾನು ಹೇಳಿದೆನೆಂದು ಹೇಳು. ನೀನು ಹೋಗಬಹುದು.

ನಾರದ: ಆಯಿತು ಪ್ರಭೂ! ಜೈ ಶ್ರೀಮನ್ನಾರಾಯಣ! (ಎಂದು ಹರಿನಾಮ ಸ್ಮರಣೆಮಾಡುತ್ತಾ ನಾರದನ ನಿರ್ಗಮನ.)

ಪರಮೇಶ್ವರ: ದೇವಿ, ನೀನು ಹಳೆಯೂರಿನ ಹಳೆಯ ದೇವಸ್ಥಾನದಲ್ಲಿ ನೆಲಸು. ನಾನು ಭೂಲೋಕದಲ್ಲಿರುವ ವರೆಗೆ ಅಲ್ಲೇ ಇದ್ದು, ಒಟ್ಟಿಗೆ ಕೈಲಾಸಕ್ಕೆ ಬರಬಹುದು.

ಪಾರ್ವತಿ: ಪ್ರಾಣನಾಥ, ನಿಮ್ಮಿಚ್ಛೆಯಂತಾಗಲಿ! (ಎಂದು ಶಿವನಿಗೆ ವಂದಿಸಿ, ಪಾದಧೂಳನ್ನು ಶಿರದಲ್ಲಾಂತು ಹೋಗುವಳು.)

ಪರಮೇಶ್ವರ: ಷಣ್ಮುಖನೇ, ನೀನು ಇಲ್ಲಿಂದ ಹೊರಟು ಭೂಲೋಕಕ್ಕೆ ಹೋಗಿ ಸುಬ್ರಹ್ಮಣ್ಯದಲ್ಲಿ ನೆಲಸು. ಗಣಪತಿಯೆ ನೀನೂ ಭೂಲೋಕದ ಒಂದು ದೇವಸ್ಥಾನದಲ್ಲಿ ನೆಲಸು. ಮರಳಿ ಒಟ್ಟಿಗೆ ಎಲ್ಲರೂ ಇಲ್ಲಿಗೆಬರುವ.

ಷಣ್ಮುಖ, ಗಣಪರು: ತಮ್ಮಾಜ್ಞೆಯನ್ನು ಶಿರಸಾವಹಿಸಿದೆ, ತಾತಾ. (ಎಂದು ಶಿವನಿಗೆ ವಂದಿಸಿ ಹೋಗುವರು.)

ಪರಮೇಶ್ವರ: ಪ್ರಮಥರಿರಾ! ನೀವು ಇಲ್ಲಿಂದ ಹೊರಟುಹೋಗಿರಿ.

ಪ್ರಮಥರು: ಅಪ್ಪಣೆ, ಮಹಾಪ್ರಭು! (ಎಂದು ಹೋಗಿ ಹಳ್ಳಿಯ ಕಾಡುಮರಗಳಲ್ಲಿ, ಶಿಲೆಗಳಲ್ಲಿ ವಾಸಿಸುವರು)

ಪರಮೇಶ್ವರ: (ಸ್ವಗತ) ಭೂಲೋಕಕ್ಕೆ ಹೋಗದೆ ಬಹಳ ದಿವಸಗಳಾದವು. ಹೋಗಿ ಜನಜೀವನವನ್ನು ಪರಿಶೀಲಿಸಿ, ಧರ್ಮಸ್ಥಾಪನೆಯನ್ನು ಮಾಡಿ ಹಿಂದಿರುಗುತ್ತೇನೆ. ಸಕಲಸುರ ಮುನಿಜನರಿರಾ, ಕೇಳಿರಿ! ಅಷ್ಟದಿಕ್ಪಾಲಕರಿರಾ, ಕೇಳಿರಿ! ಅಷ್ಟವಸುಗಳಿರಾ, ತಿಳಿಯಿರಿ! ಈ ಶಿವನು ಲೋಕದಲ್ಲಿ ಧರ್ಮಸ್ಥಾಪನೆಯನ್ನು ಮಾಡದೆ ಮರಳಿ ಕೈಲಾಸಕ್ಕೆ ಹಿಂದಿರುಗಲಾರ! ಅರಿತಿರಿ, ಇದೇ ನನ್ನ ಪ್ರತಿಜ್ಞೆ! (ತೆರೆ.)

## ದೃಶ್ಯ ೨

[ಹಚ್ಚಹಸುರಿನ ಸಸ್ಯಗಳ ನಾಡಿನಲ್ಲಿ ಸನ್ಯಾಸಿಯೊಬ್ಬನು ಬರುತ್ತಿರುವನು.]

ಸನ್ಯಾಸಿ (ಸ್ವಗತ): ಎಂಥ ವನರಾಜಿ! ಕಣ್ಮನಗಳನ್ನು ಸೂರೆಗೊಳ್ಳುವ ನವೀನ ದೃಶ್ಯಗಳು ದೃಷ್ಟಿ ಹರಿದಲ್ಲೆಲ್ಲಾ ಕಂಗೊಳಿಸುತ್ತಿವೆ. ಝುರಿತೊರೆಗಳ ನಿರ್ಝರರವವು ಕಾಡುಹಕ್ಕಿಗಳ ಸುಶ್ರಾವ್ಯ ಸಂಗೀತದೊಡನೆ ಕೇಳಿಬರುತ್ತದೆ ನೀರತುಂತುರು ಹನಿಗಳನ್ನೂ ಸೌರಭವನ್ನೂ ಒಳಗೊಂಡ ಮಂದಮಾರುತನು ನಮ್ಮನ್ನು ಪರಿಚರಿಸಿಕೊಂಡು ಮಂದನಡೆಯಿಂದ ಮುಂದುವರಿಯುವನು. ಹಾ! ನಾನೆಲ್ಲಿದ್ದೇನೆ? ರಾಮನಾಳಿದ ನಾಡಿನ ಒಂದು ಮೂಲೆಯಲ್ಲಿ! ಇಲ್ಲಿಯ ಜನರು ಇಲ್ಲಿಯ ಪಶುಗಳಿಗಿಂತಲೂ ಕೀಳಾಗಿರುವರೇ ಈಗ? ಸ್ವಲ್ಪವಾದರೂ ಹಳೆಯ ಸಂಸ್ಕೃತಿಯುಳಿಯದಿರಬಹುದೇ? ಆದರೆ, ನಾರದನು ತಪ್ಪು ವರದಿಮಾಡುವವನೇ? ಅವನು ಹೇಳಿದುದು ನಿಜವಿರಲೇಬೇಕು. ಸನ್ಯಾಸಿ ವೇಷಧರಿಸಿ, ಕರ್ತವ್ಯಕ್ಷೇತ್ರಕ್ಕೆ ಈಗಲೇ ಧುಮಕುತ್ತೇನೆ. (ತೆರೆ).

## ದೃಶ್ಯ ೩

[ಅಚ್ಚಹಸುರಿನ ವೃಕ್ಷರಾಜಿಗಳುಳ್ಳ ನಿತ್ಯಹರಿವ ನದಿತೊರೆಗಳ, ತಿಳಿಗೊಳದ ಹತ್ತಾರು ಗುಡಿಸಲುಗಳುಳ್ಳ ಚಿಕ್ಕ ಹಳ್ಳಿ.]

ಸನ್ಯಾಸಿ: (ಮನೆಯ ಮುಂದೆ ನಿಂತು) ಅಮ್ಮಾ, ಬಹಳ ಬಳಲಿದೆ. ಬಾಯಾರಿದೆಯಮ್ಮಾ. ಸ್ವಲ್ಪ ನೀರು ಕೊಡಿರಮ್ಮಾ.

ಯಜಮಾನಿ: ನೀನು ಹೊತ್ತಲ್ಲದ ಹೊತ್ತಿಗೆ ಬಂದು ನೀರು ಕೇಳಲು ಇದೇನು ನೀರಿನ ಕಟ್ಟೆಯೇ? ನಡೆಯಿಲ್ಲಿಂದ!

ಯಜಮಾನ: ನೀರು ಕೊಟ್ಟರೇನು ಮನೆ ಮುಳುಗಿ ಹೋದೀತೇನೆ? ನಾವಾದರೆ ನಿತ್ಯ ಶರಾಬು, ಮದ್ಯ, ಕಾಫಿ, ಶರಬತ್ತು ಮುಂತಾದ ಪಾನೀಯಗಳನ್ನು ಸೇವಿಸುತ್ತೇವೆ. ಅವನು ಯಾವಾಗಲೂ ಬರುವುದಿಲ್ಲ. ಅವನಿಗೆ ನೀರು ಕೊಡು.

ಯಜಮಾನಿ: ನನಗೆ ಹೇಳಲು ನೀನಾರು? ಸನ್ಯಾಸಿ, ಹೊರಟು ಹೋಗುತ್ತೀಯೋ ಇಲ್ಲವೋ?

ಯಜಮಾನ: ನೀರು ಕೊಡೆಂದರೆ ಹೀಗೆ ಹೇಳುತ್ತೀಯೆ? ನಿನ್ನ ಕುಡಿದುದರ ಮತ್ತಿಳಿಯಲಿಲ್ಲವೇ?

ಸನ್ಯಾಸಿ: ನಿಮ್ಮ ಸಂವಾದದೆಡೆಯಲ್ಲಿ ಬಾಯಾರಿಕೆಯಿಂದ ನನ್ನ ಸಂಹಾರವಾಗುತ್ತದೆ.

ಯಜಮಾನ: ಮತ್ತಿಳಿದಿದೆಯೋ ಇಲ್ಲವೋ ಎಂದು ತೋರಿಸುತ್ತೇನೆ ಚಾಂಡಾಲ! (ಮೂಲೆಯಿಂದ ಕಸಬರಿಕೆಯನ್ನು ಎತ್ತಿ ಹಿಡಿದು) ಹೊರಡು! ನೀನೂ ಸನ್ಯಾಸಿಯೂ ಹೊರಟುಹೋಗಿ!

ಯಜಮಾನ: ನಾನು ನಿನ್ನ ಗಂಡನಲ್ಲವೇ? ನಾನಿಲ್ಲಿರಬಾರದೇ? ಏನ್ಹೇಳ್ತೀಯ ನೀನು?

ಯಜಮಾನಿ: ನಾನು ಹೇಳಿದಂತೆ ಕೇಳಿಕೊಂಡು ಇಲ್ಲಿ ಬಿದ್ದಿರು. ಸನ್ಯಾಸಿಯ ಕುತ್ತಿಗೆಗೆ ಕೈಹಾಕಿ ಹೊರದಬ್ಬು.

ಯಜಮಾನ: ದೇವಿಯವರ ಅಪ್ಪಣೆಯೇ ನಮ್ಮ ಅಪ್ಪಣೆ. ಹೊರಟು ಹೋಗಪ್ಪ ಸನ್ಯಾಸಿ!

ಸನ್ಯಾಸಿ: ಅಂತೂ ಒಂದು ಗುಟುಕು ನೀರು ಕೊಡುವುದಿಲ್ಲವಲ್ಲವೇ? ಪರಶುರಾಮಸೃಷ್ಟಿಯಲ್ಲಿ ಯಾತ್ರಿಕರು ನೀರನ್ನು ಯಾಚಿಸಿದರೆ ಕೆಲವೆಡೆಗಳಲ್ಲಿ ಅದೂ ಸಿಗುವುದು ದುರ್ಲಭವೇ? ರಾಮ ರಾಮ.

ಯಜಮಾನ: ನೋಡಪ್ಪಾ ಸನ್ಯಾಸಿ, ಗಲಾಟೆಮಾಡಬೇಡ! ನನಗೆ ಬೇಕಾದವರೂ ಸ್ನೇಹಿತರೂ ಈ ಊರಲ್ಲಿ ತುಂಬಾ ಜನರಿದ್ದಾರೆ. ದಯಮಾಡಿ ಹೋಗಿಬಿಡು.

ಯಜಮಾನಿ: ಏನೇನು ಗಳಹದೆ ಸುಮ್ಮಗೆ ಹೊರಟುಹೋಗು. ಬಂದ ದಾರಿಗೆ ಸುಂಕವಿಲ್ಲ. ಹುಂ, ನಡೆ!

ಸನ್ಯಾಸಿ: ಏನೆಂದೆ ದುಷ್ಟೆ? ನಿನ್ನಂತಹ ಸ್ತ್ರೀಯರಿಂದಲೇ ಆರ್ಯ ಸಂಸ್ಕೃತಿಯು ನಶಿಸುತ್ತಿದೆ. ಭಾರತವನ್ನು ಬೆಳಗುವುದೂ, ಮುಳುಗಿಸುವುದೂ ಸ್ತ್ರೀಯರ ಕೈಯಲ್ಲೇ ಇದೆ. ದುಷ್ಟೆ, ನಿನ್ನಂಥವರು ಭಾರತದ ಆದರ್ಶ ನಾರಿ ಸಮಾಜಕ್ಕೆ ಕುಠಾರಪ್ರಾಯರು!

ಯಜಮಾನಿ: ಬಾಯಿಗೆ ಬಂದಂತೆ ಗಳಹಬೇಡ, ತಿಳಿಯಿತೇ? ಇದು ನಿನ್ನ ಮನೆಯಲ್ಲ

ಸನ್ಯಾಸಿ: ದುಷ್ಟೆ! ಬೇಡಿದವರಿಗಿಷ್ಟು ನೀರು ಕೊಟ್ಟರೇನು ಧಾಡಿ? ಇದೋ, ಹಿಡಿ ಶಾಪ!

ಯಜಮಾನ: ಸನ್ಯಾಸಿಗಳೇ, ತಮ್ಮ ಶಾಪಾನುಗ್ರಹಶಕ್ತಿ ಹಿಂದೆಯೇ ಮಾಯವಾಗಿ ಬಿಟ್ಟಿದೆ. ನಮ್ಮಲ್ಲಿ ನಿಮ್ಮಾಟ ಸಾಗದು.

ಯಜಮಾನಿ: ಬೇಗ ನಡಿಯೋ, ಇಲ್ಲಿಂದ ಮರ್ಯಾದೆಯಿಂದ?

ಸನ್ಯಾಸಿ: ನೀರಿಲ್ಲವೇ?

ಯಜಮಾನಿ: ನೀರಿಲ್ಲ. ಯಾವ ಭಾಷೆಯಿಂದ ನಿನಗೆ ಹೇಳಬೇಕು? ಬೊಬ್ಬೆ ಹೊಡೆದು ಸಾಕುಸಾಕಾಯಿತು. (ಕಸಬರಿಕೆಯನ್ನು ಹಿಡಿದು ಕೊಂಡು ಬರುವಳು.)

ಸನ್ಯಾಸಿ: ದುಷ್ಟೇ! ನನ್ನನ್ನು ಅವಮಾನಗೊಳಿಸಲೆತ್ನಿಸಿದ ನೀನು ಸತ್ತೇ ಹೋಗು.

ಯಜಮಾನಿಯ ಕೈಯಿಂದ ಕಸಬರಿಕೆಯು ತನ್ನಿಂದ ತಾನೇ ಬೀಳುವುದು. ಬಿದ್ದು ನರಳಿ ನರಳಿ ಸಾಯುವಳು).

ಸನ್ಯಾಸಿ: ಯಜಮಾನ, ಸ್ವಲ್ಪ ನೀರು ತಾ.

ಯಜಮಾನ: ಮಹಾನುಭಾವ, ಸ್ವಲ್ಪ ಸೈರಿಸು. ನೀರನ್ನು ಸೇದಿ ತರುವಾಗ ಹೊತ್ತಾದೀತು. ಅಷ್ಟರ ವರೇಗಿನ ಉಪಶಮನಕ್ಕೆ ಈ ಶರಾಬನ್ನು ಕುಡಿ.

ಸನ್ಯಾಸಿ: (ಶರಾಬನ್ನು ಕುಡಿದು) ಭಗವಂತಾ, ಹಿಂದೆ ಹಾಲಾಹಲವನ್ನು ಕುಡಿದಿದ್ದೇನಾದರೂ ಇಷ್ಟು ಗಂಟಲು ಸುಟ್ಟಿರಲಿಲ್ಲ!

ಯಜಮಾನ: ಇದೋ—(ನೀರನ್ನು ತಂದುಕೊಡುವನು).

ಸನ್ಯಾಸಿ: (ನೀರನ್ನು ಸ್ವೀಕರಿಸಿ) ಇನ್ನು ಮುಂದೆ ನಿನ್ನ ಮನೆ ಬಾಗಿಲಿಗೆ ಬಂದವರಿಗೆ ನೀರನ್ನು ಕೊಡಲು ಮರೆಯಬೇಡ. ಈ ನಾಡಿನವರೆಲ್ಲರೂ ಧರ್ಮಿಷ್ಠರಾಗಿ ಬಾಳಿ.

ಯಜಮಾನ: ಅಪ್ಪಣೆ! (ತೆರೆ)

ದೃಶ್ಯ ೪

[ಊರ ಹೊರಬದಿ: ಅನೇಕ ಕವಲುದಾರಿಗಳಿಂದೊಡಗೂಡಿದ ಗುಡ್ಡಗಾಡುಗಳ ಪ್ರದೇಶ.]

ಸನ್ಯಾಸಿ: (ಸ್ವಗತ) ನಾರದನ ಮಾತು ಪೊಳ್ಳಲ್ಲ. ಹೋದಲ್ಲಿ ಬಂದಲ್ಲಿ ಕೂತಲ್ಲಿ ಕುಡುಕರು! ಕೊಲೆಗಡುಕರು! ಕೆಡುಕರು! ಭಾರತದಲ್ಲಿ ಹಲವು ಕಡೆಗಳಲ್ಲಿ ಹೀಗಿರಬಹುದು ಖಂಡಿತವಾಗಿಯೂ ಭಾರತದಲ್ಲಿ ಧರ್ಮವನ್ನು ನೆಲೆಗೊಳಿಸಿ, ಹಿಂದಿನ ಕೀರ್ತಿಶಿಖರಕ್ಕೆ ಅದನ್ನು ಸೆಳೆದೊಯ್ಯಬೇಕು. ಭಾರತದಲ್ಲಿ ನವೀನ ಕ್ರಾಂತಿಯಾಗಬೇಕು. ತನ್ಮೂಲಕ ಭಾರತದ ಪುನರುದ್ಧಾರವಾಗಬೇಕಲ್ಲದೆ ಧರ್ಮ ಸ್ಥಾಪನೆಯಾಗಿ ದೇಶದಲ್ಲಿ ಸುಭಿಕ್ಷ, ಸುಖ, ಶಾಂತಿಗಳು ನೆಲೆಗೊಳ್ಳಬೇಕು.

(ತೆರೆಯಲ್ಲಿ ಪಿಸುಪಿಸು ಮಾತೂ, ಆ ಬಳಿಕ ದೊಡ್ಡ ಶಬ್ದವೂ ಚೀತ್ಕಾರವೂ ಕೇಳಬರುವುದು)

ಸನ್ಯಾಸಿ: (ದಿವ್ಯದೃಷ್ಟಿಯಿಂದ ನೋಡಿ) ಇವರು ಮನೆಗೆ ನುಗ್ಗಿ ಹಣವನ್ನಪಹರಿಸಿ, ಇದಿರಾದ ಶಾಹುಕಾರನನ್ನು ಕೊಂದು ಪಾರಾಗಿ ಬಂದಿರುವರು.

(ಇಬ್ಬರ ಪ್ರವೇಶ)

ಒಬ್ಬ: ಬಾರಣ್ಣ ಬಾ! ಜಾಗ್ರತೆಯಾಗಿ ಹೋಗುವ. ಇವನಾರು ಭಿಕಾರಿ?

ಎರಡನೇಯವ: ಇವ ಯಾರಾದರೆ ನಮಗೇನು? ಹೋಗೋಣ.

ಸನ್ಯಾಸಿ: ಅಪ್ಪಾ, ಹಳೆಯೂರಿನ ಹಳೆದೇಗುಲಕ್ಕೆ ದಾರಿ ಯಾವುದಣ್ಣಾ?

ಒಬ್ಬ: ನಮಗೇನು ಗೊತ್ತು?

ಎರಡನೇಯವ: ಕಾಲು ಒಯ್ದಲ್ಲಿ ಹೋಗು. ದೇವರು ದಾರಿ ತೋರಿಸುತ್ತಾನೆ.

ಸನ್ಯಾಸಿ: ಪರರ ಹಣವನ್ನಪಹರಿಸಿಕೊಂಡು ಹೋಗುವ ನಿಮಗಿಷ್ಟು ಸೊಕ್ಕೇ? ನಿಮ್ಮ ಕೈಕಾಲುಗಳು ಮುರಿದು ಬೀಳಲಿ!

(ಇಬ್ಬರ ಕೈಕಾಲುಗಳೂ ಮುರಿದುಬೀಳುವುವು. ಅವರು "ರಾಮ ರಾಮ" ಎಂದು ಮರುಗುವರು.)

ಸನ್ಯಾಸಿ: ಮಾಡಿದ ಕೆಲಸಕ್ಕೆ ಪಶ್ಚಾತ್ತಾಪಪಡಿ. ಶ್ರೀರಾಮಚಂದ್ರನನ್ನು ನೆನೆದರೆ ಮೋಕ್ಷ ಸಿಕ್ಕೀತು. (ತೆರೆ).

## ದೃಶ್ಯ ೫

[ಹಳೆಯೂರಿನ ನಿರ್ಜನ ಪ್ರದೇಶದಲ್ಲೊಂದು ಹಳೆ ದೇಗುಲ. ಅನೇಕ ಭಕ್ತರೂ, ದಾರೀಹೋಕರೂ ಊರಿನವರೂ ಬಂದು ದೇವಿಗೆ ವಂದಿಸಿ, ಪ್ರಸಾದ ಸ್ವೀಕರಿಸಿಹೋಗುತ್ತಿರುವರು]

ಊರವರಲ್ಲಿ ಒಬ್ಬ: ರಾಮ ರಾಮ! ಆ ಪೂಜಾರಿ ಹೀಗೆಮಾಡಿಯಾನೆಂದು ನಮಗೇನು ಗೊತ್ತು? ಪೂಜೆಯೊಪ್ಪಿಸಿದ ಒಂದುವರೆ ತಿಂಗಳಲ್ಲೇ ಅವನೂ ಭಂಡಾರದ ಹಣವೂ ಒಟ್ಟಿಗೇ ಪರಾರಿ.

ಊರವರಲ್ಲಿ ಎರಡನೆಯವ: ಬರುವಾಗ ಎಷ್ಟು ಸಾಧುವಾಗಿದ್ದ! 'ಬಾಯಿಗೆ ಬೆರಳು ಹಾಕಿದರೆ ಕಚ್ಚಲು (ಕಡಿಯಲು) ಕೂಡ ತಿಳಿಯದವ' ವರೆನ್ನುತ್ತಾರಲ್ಲ, ಹಾಗಿದ್ದ.

ಊರವರಲ್ಲಿ ಮೂರನೇಯವ: ಅವ ಹೋಗಲಿ. ಅವ ಹೋದರೆ ಈ ವಿಶಾಲ ಪ್ರಪಂಚದಲ್ಲಿ ಬೇರಾರೂ ಇಲ್ಲವೇ?

ಊರವರಲ್ಲಿ ಮೊದಲು ಮಾತಾಡಿದವ: ಇದ್ದಾರೆ. ಎಲ್ಲರ ಬುದ್ಧಿಯೂ ಹಾಗಾದರೆ ದೇವಿಗೆ ಪೂಜೆ ಪುರಸ್ಕಾರಗಳು ಸರಿಯಾಗಿ ಹೇಗೆ ತಾನೇ ಡೆನಯುವುವು?

ಊರವರಲ್ಲಿ ಎರಡನೇಯವ: ನಮಗೇಕಪ್ಪ ಈ ವಿಚಾರ? ಊರಿಗೆ ಗೌಡರಿದ್ದಾರಲ್ಲ? ಅವರು ಪೂಜಾರಿಯನ್ನು ನೇಮಿಸುತ್ತಾರಲ್ಲ?

ಮೂರನೇಯವ: ನಾವು ಕೂಡಾ ಊರಿನ ಸಮಸ್ಯೆಗಳನ್ನು ತಿಳಿದುಕೊಳ್ಳಬೇಕು. ಸ್ವತಂತ್ರ ಭಾರತದಲ್ಲಿ ಪ್ರತಿಯೊಬ್ಬರೂ ಸ್ವತಂತ್ರವಾಗಿ ವಿಚಾರಿಸಲು ಅರ್ಹರು. ನಮ್ಮ ಸಮಸ್ಯೆಗಳನ್ನು ನಾವೇ ಬಿಡಿಸಿಕೊಳ್ಳಬೇಕಲ್ಲವೇ? ನಮ್ಮ ತಲೆಯ ಮೇಲೆ ನಮ್ಮ ಕೈಯಲ್ಲವೇ?

ಎರಡನೇಯವ: ಸರಿ. ಆದರೆ ನಮ್ಮ ಸ್ವಾತಂತ್ರ್ಯದಿಂದ ಇನ್ನೊಬ್ಬರಿಗೆ ಘಾತುಕವಾಗಬಾರದು.

ನಾಲ್ಕನೆಯವ: ಹೋಗೋಣ. ನಮಗೆ ಊರಲ್ಲಿ ತುಂಬಾ ಕೆಲಸ ವಿದೆ. ಇಲ್ಲೇ ಮಾತಾಡುತ್ತಾ ಕುಳಿತರೆ ನಮ್ಮ ಕೆಲಸಗಳೆಲ್ಲಾ ಬಾಕಿ ಯಾಗುವುವು.

ಮೂರನೇಯವ: ಹೋಗುವ, ಇನ್ನೊಮ್ಮೆ ಸಂಧಿಸೋಣ! (ಅವರು ಹೋಗುವಾಗ ಮತ್ತೆ ಹಲವರು ಬರುವರು.)

ಅವರಲ್ಲಿ ಮೊದಲನೇಯವ: (ಹಣದ ಗಂಟನ್ನು ದೇವಿಯ ಪಾದದ ಬಳಿಯಲ್ಲಿಟ್ಟು) ದೇವೀ, ನಿನ್ನೆ ನಮಗೆ ಸಿಕ್ಕಿದ ಸೊತ್ತಿನಲ್ಲಿ ಸ್ವಲ್ಪ ಭಾಗವನ್ನು ನಿಮಗೊಪ್ಪಿಸಿರುವೆವು. ಈವತ್ತೂ ನಮಗೆ ನಿರ್ವಿಘ್ನವಾಗಿ ಜಯವು ಸಿಗು ವಂತೆ ಮಾಡು (ಎಂದು ವಂದಿಸುವನು.)

ಸನ್ಯಾಸಿಯ ಪ್ರವೇಶ (ಸ್ವಗತ): ಹಾ, ಠಕ್ಕರಿಗೂ, ಡಾಂಭಿಕರಿಗೂ, ಕಳ್ಳರಿಗೂ ದೇವರಿದ್ದಾನಲ್ಲ!

ಎರಡನೇಯವನು: ದೇವೀ, ಇದೊ, ಹೊರಡುವೆವು. (ಇಬ್ಬರೂ ವಂದಿಸುವರು.)

(ದೇವಿಯು, 'ದುಷ್ಟರೇ, ನಿಮಗಿಂದು ಬಡವರ ಶಾಪವು ತಟ್ಟಿತು' ಎಂದು ತ್ರಿಶೂಲದಿಂದ ಇರಿಯುವಳು. ಇಬ್ಬರೂ ಚೀರಿ ನೆಲದಲ್ಲಿ ಹೊರಳುವರು.)

(ಸನ್ಯಾಸಿಯು ತನ್ನ ನಿಜಸ್ವರೂಪವನ್ನು ತೋರುವನು. ನಂದಿಯು ಶಿವನಿಗೆ ವಂದಿಸಿ, ಬಳಿಯಲ್ಲಿ ನಿಂತುಕೊಳ್ಳುವನು.)

ಪಾರ್ವತಿ: ಪ್ರಾಣನಾಥ, ಕೈಲಾಸಕ್ಕೆ ಹಿಂದಿರುಗೋಣವೇ? ಬಂದು ಬಹಳ ಸಮಯವಾಯಿತು.

ಪರಮೇಶ್ವರ: ದೇವಿ, ಧರ್ಮಸ್ಥಾಪನೆಯಾಗದೆ ಕೈಲಾಸಕ್ಕೆ ಹೋ ಗಲು ಇಂಬಿಲ್ಲ. ಹಾಗೆ ನಾನು ಪ್ರತಿಜ್ಞೆಯನ್ನೂ ಮಾಡಿದ್ದೇನೆ. ಎಲ್ಲೆಲ್ಲೂ ದುಷ್ಟರು ತುಂಬಿಹೋಗಿದ್ದಾರೆ.

ಪಾರ್ವತಿ: ಇದು ದುಷ್ಟರ ಬೀಡು ಪತಿದೇವಾ. ಇವರೊಂದಿಗೆ ಇಷ್ಟರವರೇಗೆ ಹೇಗೂ ಇದ್ದುದಾಯಿತು. ಮುಂದೇನು ದಾರಿ? ಸಜ್ಜನರಿಗೆ ದುರ್ಜನರ ಮಧ್ಯದಲ್ಲಿರಲು ಕಷ್ಟವಾಗುವಂತೆ ನನಗೂ ಇಲ್ಲಿರಲು ಕಷ್ಟ ವಾಗುತ್ತಿದೆ.

ಪರಮೇಶ್ವರ: ಸದ್ಯ ದಾರಿಯಾವುದೂ ಉಳಿದಿಲ್ಲ ದೇವಿ.

ಪಾರ್ವತಿ: ಹಾಗಿದ್ದರೆ ಶ್ರೀಮನ್ನಾರಾಯಣನನ್ನು ನೆನೆಯೋಣ.

ಇಬ್ಬರೂ: ಜೈ ಶ್ರೀಮನ್ನಾರಾಯಣ! ಕೃಪಾಳುವೇ, ವೈದೋರು! ಮಾಧವಾ, ಕೇಶವಾ, ಭಕ್ತವತ್ಸಲ, ಪ್ರತ್ಯಕ್ಷನಾಗು!

(ಶ್ರೀಮನ್ನಾರಾಯಣನು ಪ್ರತ್ಯಕ್ಷನಾಗುವನು.)

ಪಾರ್ವತಿ: ಶ್ರೀಮನ್ನಾರಾಯಣ, ವಂದಿಸುವೆನು.

ಶ್ರೀಮನ್ನಾರಾಯಣ: ಶುಭಮಸ್ತು! ಭಾವ, ಬಹಳ ಕಷ್ಟಪಟ್ಟೆ. ನನ್ನನ್ನು ಬಂದು ಆಲಿಂಗಿಸು. (ಆಲಿಂಗಿಸಿಕೊಳ್ಳುವರು.)

ಪರಮೇಶ್ವರ: ಮಾಧವಾ, ಜಗತ್ತು ಇಂದು ಎತ್ತ ಸಾಗುತ್ತಿದೆ ಎಂದೇ ಅರ್ಥವಾಗುವುದಿಲ್ಲ. ಎಲ್ಲೆಲ್ಲೂ ಅಧರ್ಮವು ತಾಂಡವವಾಡುತ್ತಿದೆ. ಧರ್ಮಸ್ಥಾಪನೆಯಾಗದೆ ನಾನು ಕೈಲಾಸಕ್ಕೆ ಹಿಂದಿರುಗುವಂತಿಲ್ಲವೆಂದು ನಿನಗೆ ಗೊತ್ತೇ ಇದೆ! ಇದೇನು ದೇವಾ?

ಶ್ರೀಮನ್ನಾರಾಯಣ: ಈಗ ಜಗತ್ತು ಅದರಷ್ಟಕ್ಕೇ ಇಚ್ಛೆಬಂದತ್ತ ನಡೆಯುಲಿ, ಭಾವ! ನಾನು ಯುಕ್ತಸಮಯದಲ್ಲಿ ಬಂದು ಧರ್ಮಸ್ಥಾಪನೆ ಮಾಡುತ್ತೇನೆ. ಈ ಯುಗದಲ್ಲಿ ಧರ್ಮಸ್ಥಾಪನೆಮಾಡಲು ನಿಮ್ಮ ಸಹಾಯವೂ ಬೇಕು. ಅದು ನನ್ನಿಂದೊಬ್ಬನಿಂದಲೇ ಕಷ್ಟಸಾಧ್ಯ. ನೀವು ಅಷ್ಟರವರೇಗೆ ತಪಸ್ಸನ್ನಾಚರಿಸಿರಿ!

ಪರಮೇಶ್ವರ: ಹಾಗಿದ್ದರೆ ಇದಕ್ಕೆ ಬೇರೆ ದಾರಿಯಿಲ್ಲವೇ? ಈಗಲೇ ಬಂದು ನಮ್ಮೊಂದಿಗೆ ಸಹಕರಿಸಿ, ಧರ್ಮಸ್ಥಾಪನೆ ಮಾಡಬಾರದೊ ದೇವಾ?

ನಾರಾಯಣ: ಸಾಧ್ಯವಿಲ್ಲ ಭಾವ! ಎಲ್ಲದಕ್ಕೂ ಒಂದೊಂದು ಕಾಲ ವಿದೆ. ಆದುದರಿಂದ ಕಾಲಬರುವ ವರೇಗೆ ಕಾಯಬೇಕು. ಈಗ ಜನರು ಸೂರ್ಯನಿಗೆ ರಾಕೇಟುಬಿಡುವುದನ್ನು, ಚಂದ್ರನಿಗೆ ರಾಕೇಟು (Rocket) ಬಿಡುವುದನ್ನು ನೋಡಿ ಆನಂದಿಸುವ. ಅಣುವಿಭಜನೆ ಮುಂತಾದ ಅದ್ಭುತ ವನ್ನು ನೋಡಿ ಸಂತೋಷಿಸುವ! ಜಗತ್ತು ವಿಜ್ಞಾನದ ದೆಸೆಯಿಂದ ಅದ ರಷ್ಟಕ್ಕೇ ವಿನಾಶದತ್ತ ನಡೆಯುತ್ತಿದೆ! ಅವಶ್ಯಬಿದ್ದಲ್ಲಿ ನಾನು ಕೂಡಲೇ ಬಂದು ಧರ್ಮಸ್ಥಾಪನೆಮಾಡುತ್ತೇನೆ. ಅಷ್ಟರವರೇಗೆ ಸ್ವಲ್ಪ ಸಹಿಸಿ ಕೊಂಡಿರು.

ಪಾರ್ವತಿ: ನಿನ್ನಿಚ್ಛೆ ಶ್ರೀಮನ್ನಾರಾಯಣ. ಆದಷ್ಟು ಬೇಗನೆ ಬಂದು ಧರ್ಮಸ್ಥಾಪನೆ ಮಾಡು.

ಶ್ರೀಮನ್ನಾರಾಯಣ: ತಥಾಸ್ತು! (ಶ್ರೀಮನ್ನಾರಾಯಣನು ಅಂತರ್ಧಾನನಾಗುವನು.)

ಪಾರ್ವತಿ: ನಾವು ಮಂದಾಕಿನಿಯ ತಡಿಗೆ ಹೋಗುವ ಪತಿದೇವಾ. ಅಲ್ಲಿ ಬೇಗನೆ ಬಂದು ಧರ್ಮಸ್ಥಾಪನೆ ಮಾಡಲೋಸುಗ ಶ್ರೀಮನ್ನಾರಾಯಣನಿಗೆ ಪೂಜೆಪುರಸ್ಕಾರಗಳನ್ನು ದಿನಾಲೂ ಮಾಡುತ್ತಿರುವ.

ಪರಮೇಶ್ವರ: ಆಗಬಹುದು ದೇವಿ! ನಂದೀ, ಇತ್ತಬಾ. ನಮ್ಮನ್ನು ಹೊತ್ತುಕೊಂಡು ಮಂದಾಕಿನೀ ನಡಿಗೆ ನಡೆ!

ನಂದಿ: ಅಪ್ಪಣೆ. (ಪಾರ್ವತೀಪರಮೇಶ್ವರರನ್ನು ಹೊತ್ತುಕೊಂಡು ಮಂದಾಕಿನೀ ತಡಿಯತ್ತ ಹೋಗುವನು.) ತೆರೆ.

## ದೃಶ್ಯ ೬

(ಕೈಲಾಸದಲ್ಲಿ ಪಾರ್ವತೀಪರಮೇಶ್ವರರ ಒಡ್ಡೋಲಗ.)

ಪರಮೇಶ್ವರ: ದೇವೀ, ಕೈಲಾಸಕ್ಕೆ ಬರಬೇಕಿದ್ದರೆ ಎಷ್ಟು ಸಮಯವಾಯಿತು! ಹೇಗೂ ಧರ್ಮಸ್ಥಾಪನೆಯಾದ ಮೇಲೆಯೇ ಬಂದೆವು.

ಪಾರ್ವತಿ: ಹೋಗಿ ತುಂಬಾ ಸಮಯವಾಯಿತು ದೇವಾ. ಶ್ರೀಮನ್ನಾರಾಯಣನು ಬಂದು ಬೇಗನೇ ಧರ್ಮಸ್ಥಾಪನೆಮಾಡಿದುದರಿಂದ ಈಗಲಾದರೂ ಕೈಲಾಸಕ್ಕೆ ಬಂದೆವು.

ನಂದಿ: ಷಣ್ಮುಖ, ಗಣಪರು ಇನ್ನೂ ಬಂದಿಲ್ಲವಲ್ಲ ದೇವಾ, ಅವರಿಲ್ಲದೆ ಬಹಳ ಬೇಸರವಾಗುತ್ತಿದೆ.

(ಷಣ್ಮುಖ, ಗಣಪರು ಬಂದು ಪಾರ್ವತೀಪರಮೇಶ್ವರರಿಗೆ ವಂದಿಸಿ ತಮ್ಮ ಆಸನದಲ್ಲಿ ಮಂಡಿಸುವರು.)

ಪಾರ್ವತಿ: ದೇವಾ, ಶ್ರೀಮನ್ನಾರಾಯಣನು ಇಲ್ಲಿಗೆ ಬಂದಿಲ್ಲವಲ್ಲ?

ಪರಮೇಶ್ವರ: ಲಕ್ಷ್ಮಿಯು ಅವನನ್ನು ಬಹಳ ದಿನಗಳಿಂದ ಕಾಯುತ್ತಿರುವಳು. ಆದುದರಿಂದ ಅವನು ವೈಕುಂಠಕ್ಕೆ ನೇರವಾಗಿ ಹೋದನು.

(ಹರಿನಾಮಸ್ಮರಣೆಯನ್ನು ಮಾಡುತ್ತಾ ನಾರದನ ಪ್ರವೇಶ.)

ನಾರದ: ಭಕ್ತವತ್ಸಲ, ನಾರದನು ವಂದಿಸುತ್ತಿದ್ದಾನೆ. (ವಂದಿಸುವನು)

ಪರಮೇಶ್ವರ: ಶುಭಮಸ್ತು! ನಾರದಾ, ನನಗೆ ಬಹಳ ಆಯಾಸವಾಗಿದೆ. ನಾನು ಸ್ವಲ್ಪ ವಿರಮಿಸಲೇ? ಈಗ ಲೋಕವು ಸುಸೂತ್ರವಾಗಿ ನಡೆಯುವುದಷ್ಟೆ?

ನಾರದ: ತಮ್ಮ ದಯದಿಂದ ಈಗ ಲೋಕವು ಸುಸೂತ್ರವಾಗಿಯೇ ನಡೆಯುತ್ತಿದೆ. ತಮಗೂ ವಿಶ್ರಾಂತಿಯೆ? ಸರಿ. ಅಬ್ಬಾ, ನಿನ್ನ ಲೀಲೆಯೇ! ಪ್ರಭೋ, ನಾನಿನ್ನು ಹೋಗಲೇ?

ಪರಮೇಶ್ವರ: ಹೋಗಬಹುದು ನಾರದಾ!

ನಾರದ: ಜೈ ಶ್ರೀಮನ್ನಾರಾಯಣ! ಜಗತ್ಸಾರಥಿಯಾದ ನಿನ್ನ ಆಗು ಹೋಗುಗಳನ್ನು ಮಹಾಮುನಿಗಳೇ ತಿಳಿಯದಿರುವಾಗ ಇನ್ನಾರು ಬಲ್ಲರು?

ಪರಮೇಶ್ವರ: ನಾರದಾ, ಕಾಲಕಾಲಕ್ಕೆ ಬಂದು ವರದಿಯನ್ನೊಪ್ಪಿಸು. ನಂದೀ, ಜಾಗರೂಕನಾಗಿ ಇಲ್ಲಿ ಕಾದಿರು.

ನಂದಿ: ಅಪ್ಪಣೆ, ಮಹಾಪ್ರಭೋ.

(ಸಂಪೂರ್ಣ)



Edited, Printed & Published by K. V. Shenoy
at The Prabhat Printers, Ltd., Mangalore.